CPMG / KA / BG-GPO/13/2003-2005

ವಿಶ್ವಮಾನವ ವರ್ಷ



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೩೯ | ಬೆಂಗಳೂರು, ಗುರುವಾರ, ಸೆಪ್ಟೆಂಬರ್ ೧೬, ೨೦೦೪ (ಬಾದ್ರಪದ ೨೫, ಶಕ ವರ್ಷ ೧೯೨೬) | ಸಂಚಿಕೆ ೩೮ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳವರ ನ್ಯಾಯಾಲಯ,**

**ಭದ್ರಾವತಿ ವಿಭಾಗ, ಭದ್ರಾವತಿ**

**ಸಂಖ್ಯೆ: ಎಫ್‌ಓಸಿ-ಸಿಓಎನ್-ಸಿಆರ್-14/89-90, ದಿನಾಂಕ: 11ನೇ ಆಗಸ್ಟ್ 2004**

| | | |
|---|---|---|
| **ನಿರೂಪಣಾಧಿಕಾರಿಗಳು** | : | ಶ್ರೀಮತಿ ಸೀಮಾ ಗರ್ಗ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ. |
| **ಫಿರ್ಯಾದಿದಾರರು** | : | ವಲಯ ಅರಣ್ಯಾಧಿಕಾರಿಗಳು, ಚನ್ನಗಿರಿ ವಲಯ, ಚನ್ನಗಿರಿ |
| **ಅರ್ಜಿದಾರರು** | : | ಶ್ರೀ ಪ್ರಕಾಶ್ ಚಂದ್ ಬಿನ್ ಮಧುರಾ ಪ್ರಸಾದ್, ನಂ: 184/3, 3ನೇ ತಿರುವು, ದೊಮ್ಮಲ್ಲೂರು ಗ್ರಾಮ, ಬೆಂಗಳೂರು-71. |

**ಪ್ರಸ್ತಾವನೆ:-**

ದಿನಾಂಕ: 1.5.1989 ರಂದು ಚನ್ನಗಿರಿ ವಲಯ ಅರಣ್ಯಾಧಿಕಾರಿ ಮತ್ತು ಸಿಬ್ಬಂದಿಯವರು ಚನ್ನಗಿರಿ ವಲಯಕ್ಕೆ ಸೇರಿದ ಕುಕ್ವಾಡ-ಉಬ್ರಾಣಿ ಮನ್ನಾ ಜಂಗ್ಲಿಯ ಜೋಳದಾಳು ಶಾಖೆ, ಜೋಳದಾಳು ಬೀಟಿಗೆ ಸೇರಿದ ಹುಲಿಗುಂಡಿ ಪ್ಲಾಂಟೇಶನ್ ಕಡೆಯಿಂದ ಬರುವ ಗಾಡಿ ರಸ್ತೆಯ ಮಾವಿನಮರದ ದಿಬ್ಬದ ಹತ್ತಿರ ಶ್ರೀಗಂಧದ ಕಳ್ಳ ಸಾಗಾಣಿಕೆ ಆಗುವುದೆಂದು ಬಂದ ಖಚಿತ ವರ್ತಮಾನದ ಮೇರೆಗೆ ಕಾಯುತ್ತಾ ಕುಳಿತಿರುವಾಗ ಬೆಳಗಿನ ಜಾವ 4 ಗಂಟೆ ಸಮಯದಲ್ಲಿ ಒಂದು ಲಾರಿ ಕಾಡಿನ ಒಳಗೆ ಪ್ರವೇಶಿಸಿತು. ಸಿಬ್ಬಂದಿಗಳು ಕಾಯುತ್ತಿದ್ದ ಜಾಗದಿಂದ ಸುಮಾರು ದೂರದಲ್ಲಿ ಲಾರಿಯನ್ನು ನಿಲ್ಲಿಸಿ ಲಾರಿಯಲ್ಲಿದ್ದ ಜನರು ದಾಸ್ತಾನು ಮಾಡಿದ ಶ್ರೀಗಂಧದ ತುಂಡುಗಳನ್ನು ಲಾರಿಗೆ ಲೋಡು ಮಾಡಲು ಪ್ರಾರಂಭಿಸಿದರು. ಕೂಡಲೆ ಅರಣ್ಯ ಸಿಬ್ಬಂದಿಗಳು ಜಾಗ್ರತರಾಗಿ ಲಾರಿಯು ಶ್ರೀಗಂಧದ ಕಳ್ಳ ಸಾಗಾಣಿಕೆ ಮಾಡಲು ಬಂದಿದೆ ಎಂದು ಖಚಿತಪಡಿಸಿಕೊಂಡು ಅವರನ್ನು ಸುತ್ತುವರಿದು ಅಪರಾಧಿಗಳನ್ನು ಹಿಡಿಯಲು ಪ್ರಯತ್ನ ಮಾಡುವಷ್ಟರಲ್ಲಿ ಆಸಾಮಿಗಳು ದೂರದಿಂದಲೇ ಗಮನಿಸಿ ಲಾರಿಯಲ್ಲಿದ್ದ ಡೀಸೆಲ್‌ನ್ನು ಲಾರಿಗೆ ಎರಚಿ ಬೆಂಕಿಹಚ್ಚಿ ಪರಾರಿಯಾದರು. ಅವರನ್ನು ಹಿಡಿಯಲು ಪ್ರಯತ್ನಿಸಿದರು ಸಹ ಕೈಗೆ ಸಿಗಲಿಲ್ಲ. ನಂತರ ಲಾರಿಯ ಕ್ಯಾಬಿನ್‌ನಲ್ಲಿ ಬೆಂಕಿಹತ್ತಿದ್ದು, ಅದನ್ನು ಮಣ್ಣು ಸೊಪ್ಪು ಹಾಕಿ ನಂದಿಸಲಾಯಿತು. ನಂತರ ಲಾರಿಯನ್ನು ಪರಿಶೀಲಿಸಿದಾಗ ಲಾರಿಯ ಕ್ಯಾಬಿನ್ ಮತ್ತು ಅರ್ಧ ಭಾಗ ಸುಟ್ಟು ಹೋಗಿತ್ತು. ಲಾರಿಯ ಒಳಭಾಗ ಪರಿಶೀಲಿಸಿದಾಗ ಶ್ರೀಗಂಧದ ತುಂಡುಗಳಿರುವುದು ಖಚಿತಪಡಿಸಿಕೊಂಡು ಪಂಚರನ್ನು ಬರಮಾಡಿಕೊಂಡು ಶ್ರೀಗಂಧವನ್ನು ಕೆಳಗಿಳಿಸಿ ನೋಡಿದಾಗ ಅವುಗಳನ್ನು ಗರಗಸದಿಂದ ಹಾಗೂ ಕೊಡಲಿಯಿಂದ ತುಂಡರಿಸಿರುವುದು ಕಂಡು ಬಂದು, ಅವುಗಳನ್ನು ಎಣಿಸಿದಾಗ ಒಟ್ಟು 82 ಶ್ರೀಗಂಧದ ತುಂಡುಗಳಿರುತ್ತದೆ. ನಂತರ ಅಳತೆಮಾಡಿ ಇಲಾಖಾ ಛಾಪಾ ಮುದ್ರಿಸಲಾಯಿತು. ಲಾರಿಯನ್ನು ಪರಿಶೀಲಿಸಿದಾಗ ಲಾರಿಯ ಸಂಖ್ಯೆ: ಎಂಇಡಿ 7098 ಅಶೋಕ ಲೈಲ್ಯಾಂಡ್ ಕಂಪನಿಯದಾಗಿರುತ್ತದೆ. ನಂತರ ಈ ಬಗ್ಗೆ ಸ್ಥಳದಲ್ಲಿ ಮಹಜರ್ ಕ್ರಮ ಜರುಗಿಸಿ ಲಾರಿ ಹಾಗೂ ಶ್ರೀಗಂಧದ ತುಂಡುಗಳನ್ನು ಅಮಾನತ್ತುಪಡಿಸಿ ಮುಂದಿನ ಕ್ರಮಕ್ಕಾಗಿ ವಲಯ ಅರಣ್ಯಾಧಿಕಾರಿ, ಚನ್ನಗಿರಿ ವಲಯ ಕಚೇರಿ ಆವರಣಕ್ಕೆ ತೆಗೆದುಕೊಂಡು ಹೋಗಲು ತೀರ್ಮಾನಿಸಿರುತ್ತಾರೆ. ನಂತರ ಈ ಪ್ರಕರಣಕ್ಕೆ ಸಂಬಂಧಿಸಿದ ಪ್ರಥಮ ಮಾಹಿತಿ ವರದಿ ಹಾಗೂ ಸೀಜರ್

ರಿಪೋರ್ಟ್ ದಾಖಲು ಮಾಡಿ ಅರಣ್ಯ ಕಾಯ್ದೆ 1963 ಸೆಕ್ಷನ್ 71-ಎ ಪ್ರಕಾರ ಕ್ರಮ ಜರುಗಿಸಲು ಈ ನ್ಯಾಯಾಲಯಕ್ಕೆ ಹಾಜರುಪಡಿಸಿರುತ್ತಾರೆ.

ವಲಯ ಅರಣ್ಯಾಧಿಕಾರಿಗಳು ಹಾಜರುಪಡಿಸಿದ ಪ್ರಕರಣಕ್ಕೆ ಸಂಬಂಧಿಸಿದ ದಾಖಲಾತಿಗಳನ್ನು ಪರಿಶೀಲಿಸಿ ಸದರಿ ಪ್ರಕರಣವನ್ನು ಅರಣ್ಯ ಕಾಯ್ದೆ 1963 ಸೆಕ್ಷನ್ 71-ಎ ಪ್ರಕಾರ ಕ್ರಮ ಜರುಗಿಸಿ ವಶಪಡಿಸಿಕೊಂಡ ಅಶೋಕ ಲೈಲ್ಯಾಂಡ್ ಲಾರಿ ನಂ. ಎಂಇಡಿ 7098 ನ್ನು ಹಾಗೂ 82 ಶ್ರೀಗಂಧದ ತುಂಡುಗಳು ಈ ನ್ಯಾಯಾಲಯದಿಂದ ಮುಂದಿನ ಆದೇಶ ನೀಡುವವರೆಗೂ ವಲಯ ಅರಣ್ಯಾಧಿಕಾರಿ, ಚನ್ನಗಿರಿ ವಲಯ, ಚನ್ನಗಿರಿ ರವರ ಸುರಕ್ಷತೆಗೆ ನೀಡಿ ದಿನಾಂಕ: 2.5.89 ರಂದು ಆದೇಶ ನೀಡಿರುತ್ತದೆ.

ದಿನಾಂಕ: 15.5.89 ರಂದು ಅರ್ಜಿದಾರರಾದ ಶ್ರೀ ಪ್ರಕಾಶ್ ಚಂದ್ ಬಿನ್ ಮಧುರಾ ಪ್ರಸಾದ್, ಬೆಂಗಳೂರು-71 ಇವರು ವಕೀಲರ ಮುಖಾಂತರ ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ ಅಶೋಕ ಲೈಲ್ಯಾಂಡ್ ಲಾರಿ ನಂ. ಎಂಇಡಿ 7098ರ ಆರ್.ಸಿ. ಮಾಲೀಕನಾಗಿರುತ್ತೇನೆ. ಸದರಿ ವಾಹನದಿಂದಲೇ ಜೀವನ ನಿರ್ವಹಣೆ ಆಗುತ್ತಿದ್ದು, ಸದರಿ ಅರಣ್ಯ ಅಪರಾಧ ಪ್ರಕರಣಕ್ಕೂ ನನಗೂ ಯಾವುದೇ ಸಂಬಂಧ ಇರುವುದಿಲ್ಲ. ದಯಮಾಡಿ ವಾಹನ ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ.

ಅರ್ಜಿದಾರರಿಗೆ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) ಪ್ರಕಾರ ಕಾರಣ ಕೇಳಿ ತಿಳುವಳಿಕೆ ಪತ್ರವನ್ನು ದಿನಾಂಕ: 30.8.89 ರಂದು ನೀಡಿರುತ್ತದೆ. ಅರ್ಜಿದಾರರು 7.9.89 ರಂದು ವಕೀಲರ ಮುಖಾಂತರ ಸಮಜಾಯಿಸಿ ನೀಡಿ ದಿನಾಂಕ: 1.5.1989 ರಂದು ನಡೆದ ಅಕ್ರಮ ಶ್ರೀಗಂಧದ ಸಾಗಾಣಿಕೆಗೂ ನನಗೂ ಯಾವುದೇ ಸಂಬಂಧ ಇರುವುದಿಲ್ಲ. ನಾನು ಜೀವನೋಪಾಯಕ್ಕಾಗಿ ಲಾರಿಯನ್ನು ಇಟ್ಟುಕೊಂಡಿದ್ದು ದಿನಾಂಕ: 19.4.89 ರಂದು ನನ್ನ ವಾಹನವನ್ನು ಚಾಮರಾಜಪೇಟೆ, ಈದ್ಗಾ ಮೈದಾನದ ಹತ್ತಿರ ನಿಲ್ಲಿಸಿರುವ ಸಮಯದಲ್ಲಿ ಅರ್ಜಿದಾರರ ಸ್ನೇಹಿತ ಶ್ರೀ ಇಕ್ಬಾಲ್ ಎಂಬ ವ್ಯಕ್ತಿ ಬೆಂಗಳೂರಿನಿಂದ ಬೆಳಗೋಳಕ್ಕೆ ಪೇಪರ್ ಸಾಗಿಸಲು ವಾಹನವನ್ನು ಬಾಡಿಗೆಗೆ ಕಳುಹಿಸಲು ಕೋರಿಕೊಂಡಾಗ ವಾಹನದ ಚಾಲಕ ರಜೆಯ ಮೇಲೆ ತೆರಳಿ, ಆ ಸಮಯದಲ್ಲಿ ಬಾಡಿಗೆದಾರ ತನಗೆ ಪರಿಚಯಸ್ಥನಾದ ಚಾಲಕನ ಸಂಗಡ ವಾಹನವನ್ನು ರೂ. 800 ಕ್ಕೆ ಬಾಡಿಗೆ ಗೊತ್ತುಪಡಿಸಿಕೊಂಡು ತೆಗೆದುಕೊಂಡು ಹೋಗಿರುತ್ತಾರೆ. ದಿನಾಂಕ: 21.4.89 ರಂದು ವಾಪಸ್ಸು ಬರುವುದಾಗಿ ಸಹ ತಿಳಿಸಿರುತ್ತಾರೆ. ಆದರೆ 21.4.89 ರ ದಿನಾಂಕದ ನಂತರವು ಸಹ ಬಾರದೇ ಇರುವುದರಿಂದ ಗಾಬರಿಗೊಂಡು ಎಲ್ಲಾ ಕಡೆ ಹುಡುಕಿದರೂ ಸಹ ಪತ್ತೆ ಆಗಿರುವುದಿಲ್ಲ. ನಂತರ ದಿನಾಂಕ: 3.5.89 ರಂದು ಚಾಮರಾಜಪೇಟೆ ಪೊಲೀಸ್ ಸ್ಟೇಷನ್‌ನಲ್ಲಿ ಕಂಪ್ಲೇಂಟ್ ನೀಡಿರುವುದಾಗಿ ಪೊಲೀಸ್ ಠಾಣೆಯ ಎಫ್.ಐ.ಆರ್. ಜೆರಾಕ್ಸ್ ಪ್ರತಿಯನ್ನು ಸಹ ಹಾಜರುಪಡಿಸಿರುತ್ತಾರೆ. ಕೆಲವು ದಿನಗಳ ನಂತರ ವಾಹನವು ಅರಣ್ಯ ಅಪರಾಧದಲ್ಲಿ ಸಿಲುಕಿ ಚನ್ನಗಿರಿ ವಲಯ ಕಚೇರಿಯಲ್ಲಿರುತ್ತದೆ ಎಂದು ತಿಳಿದು ಬಂದು ವಾಹನ ಬಿಡಿಸಿಕೊಳ್ಳಲು ವಕೀಲರ ಮುಖಾಂತರ ಅರ್ಜಿ ಸಲ್ಲಿಸಿರುತ್ತಾರೆ.

ಈ ಪ್ರಕರಣದ ಬಗ್ಗೆ ದಿನಾಂಕ: 31.8.90 ರಂದು ಸಹಾಯಕ ಸರ್ಕಾರಿ ಅಭಿಯೋಜಕರು, ಜೆ.ಎಂ.ಎಫ್.ಸಿ. ನ್ಯಾಯಾಲಯ, ಭದ್ರಾವತಿ ಇವರು ಆಕ್ಷೇಪಣಾ ಪತ್ರ ಸಲ್ಲಿಸಿ, ಸದರಿ ಮೇಲ್ಕಂಡ ವಾಹನದಲ್ಲಿ ಶ್ರೀಗಂಧ ಸಾಗಾಣಿಕೆ ಆಗಿರುವುದು ದಾಖಲಾತಿಗಳಿಂದ ದೃಢಪಟ್ಟಿದ್ದು, ವಾಹನ ಬಿಡುಗಡೆ ಮಾಡಿದ್ದಲ್ಲಿ ಪುನಃ ಇಂತಹುದೇ ಕೃತ್ಯಕ್ಕೆ ಉಪಯೋಗಿಸುವ ಸಾಧ್ಯತೆಯಿರುತ್ತದೆ. ಆದ್ದರಿಂದ ಈ ಹಂತದಲ್ಲಿ ವಾಹನವನ್ನು ಬಿಡುಗಡೆ ಮಾಡುವುದು ಸೂಕ್ತವಲ್ಲ. ಅರ್ಜಿದಾರರ ಅರ್ಜಿಯನ್ನು ವಜಾ ಮಾಡಬೇಕಾಗಿ ವಿನಂತಿಸಿರುತ್ತಾರೆ.

ಈ ಪ್ರಕರಣದಲ್ಲಿ ಅಭಿಯೋಜನಾವತಿಯಿಂದ ದಿನಾಂಕ: 21.9.90 ರಂದು ಶ್ರೀ ಜೆ.ಬಿ. ನಾಯಕ್, ವಲಯ ಅರಣ್ಯಾಧಿಕಾರಿ, ಚನ್ನಗಿರಿ ಹಾಗೂ ಜಿ. ಸುಬ್ಬರಾವ್ ಬಿನ್ ಹೆಚ್. ಗೋಪಾಲ್, ವನಪಾಲಕ, ಜೋಳದಾಳು ಹಾಗೂ ಪಂಚಾಯ್ತಿದಾರ ಶ್ರೀ ಎಂ. ಚಂದ್ರಪ್ಪ ಬಿನ್ ಮಾದೇವಪ್ಪ, ಹಾಗೂ ವೆಂಕಟಪ್ಪ ಬಿನ್ ಸಂಕಪ್ಪ, ಜೋಳದಾಳು ವಾಸಿಗಳು ಇವರುಗಳ ಹೇಳಿಕೆಯನ್ನು ಪಡೆದು ದಾಖಲಿಸಿರುತ್ತಾರೆ. ಪ್ರತಿವಾದಿಯ ಪರ ವಕೀಲರು ವಾಹನದ ಮಾಲೀಕ ಶ್ರೀ ಪ್ರಕಾಶ್ ಚಂದ್ ಬಿನ್ ಮಧುರಾ ಪ್ರಸಾದ್, ಬೆಂಗಳೂರು ಅವರನ್ನು ಹಾಜರುಪಡಿಸಿ ಹೇಳಿಕೆ ಪಡೆದು ದಾಖಲಿಸಿರುತ್ತಾರೆ.

ಈ ಮೇಲ್ಕಂಡ ಎಲ್ಲಾ ದಾಖಲಾತಿಗಳನ್ನು ಪರಿಶೀಲಿಸಿ ಈ ಪ್ರಕರಣದಲ್ಲಿ ಅಮಾನತ್ತುಪಡಿಸಿಕೊಂಡ ವಾಹನದ ಬಗ್ಗೆ ಅಂತಿಮ ಆದೇಶ ಹೊರಡಿಸಲು ಈ ಕೆಳಕಂಡ ಅಂಶಗಳನ್ನು ಪರಿಶೀಲಿಸುವುದು ಅವಶ್ಯಕವಾಗಿದೆ.

**ಅಂಶ-1:**

ವಾಹನ ಲಾರಿ ಸಂಖ್ಯೆ: ಎಂಇಡಿ 7098ನ್ನು ದಿನಾಂಕ: 1.5.89 ರಂದು ಶ್ರೀಗಂಧದ ತುಂಡುಗಳ ಕಳ್ಳ ಸಾಗಾಣಿಕೆಯ ಸಂಬಂಧ ಅಮಾನತ್ತುಪಡಿಸಿರುವುದಾಗಿ ಹಾಗೂ ಇದರಿಂದ ಅರಣ್ಯ ಅಪರಾಧ ಪ್ರಕರಣ ದಾಖಲಾಗಿದೆಯೇ.

**ಅಂಶ-2:**

ಅಂಶ-1 ರುಜುವಾತು ಆದಲ್ಲಿ ಸದರಿ ಅಪರಾಧವು ವಾಹನದ ಮಾಲೀಕರಿಗೆ ಅಥವಾ ಅವರ ಪ್ರತಿನಿಧಿಗೆ ಅಥವಾ ಅದರ ಚಾರ್ಜ್ ಪಡೆದವರಿಗೆ (ಚಾಲಕರಿಗೆ) ತಿಳುವಳಿಕೆ ಮತ್ತು ಶಾಮೀಲಾಗಿರದೇ ಅಪರಾಧವಾಗಿದೆ ಎಂದು ಡಿಫೆನ್ಸ್‌ರವರು ರುಜುವಾತುಪಡಿಸಿರುವರೇ ಹಾಗೂ ಅವರೆಲ್ಲರೂ ಅಗತ್ಯವಾದ ಮತ್ತು ಸಾಕ್ಷ್ಯವಾಗಬಹುದಾದ ಎಲ್ಲಾ ರೀತಿಯ ಮುಂಜಾಗ್ರತೆ ಕ್ರಮ ಕೈಗೊಂಡಿರುವರೇ ಎಂದು ರುಜುವಾತುಪಡಿಸಿರುತ್ತಾರೆಯೇ?

**ಅಂಶ-3:**

ಆದೇಶವೇನು

**ಕಾರಣಗಳು**

ದಿನಾಂಕ: 1.5.1989 ರಂದು ಚನ್ನಗಿರಿ ವಲಯಾರಣ್ಯಾಧಿಕಾರಿ ಹಾಗೂ ಸಿಬ್ಬಂದಿಯವರು ಚನ್ನಗಿರಿ ವಲಯಕ್ಕೆ ಸೇರಿದ ಕುಕ್ವಾಡ-ಉಬ್ರಾಣಿ ಮನ್ನ ಜಂಗ್ಲಿ ಜೋಳದಾಳು ಶಾಖೆ, ಜೋಳದಾಳು ಬೀಟಿಗೆ ಸೇರಿದ ಹುಲಿಗುಂಡಿ ಪ್ಲಾಂಟೇಶನ್ ಹತ್ತಿರ ಗಾಡಿರಸ್ತೆಯಲ್ಲಿ ಮಾವಿನ ಮರದ ದಿಬ್ಬದ ಹತ್ತಿರ ಕಾಯುತ್ತಿರುವಾಗ ಬೆಳಗಿನ ಜಾವ ನಾಲ್ಕು ಗಂಟೆಗೆ ಲಾರಿ ನಂ. ಎಂ.ಇ.ಡಿ. 7098 ಕಾಡಿನ ಒಳಗೆ

ಪ್ರವೇಶಿಸಿ ಅಕ್ರಮವಾಗಿ ಸಂಗ್ರಹಿಸಿದ್ದ ಸುಮಾರು 82 ಶ್ರೀಗಂಧದ ತುಂಡುಗಳನ್ನು ಲಾರಿಗೆ ತುಂಬಿ ಸಾಗಿಸುವ ಸಮಯದಲ್ಲಿ ಅರಣ್ಯ ಸಿಬ್ಬಂದಿ ವರ್ಗದವರು ವಶಪಡಿಸಿಕೊಂಡು ಪ್ರಕರಣವನ್ನು ದಾಖಲು ಮಾಡಿ ಸ್ಥಳದಲ್ಲಿ ಪಂಚರ ಸಮಕ್ಷಮ ಸ್ಥಳ ಮಹಜರ್ ನಡೆಸಿ ಪ್ರಥಮಮಾಹಿತಿ ವರದಿ, ಸೀಜರ್ ರಿಪೋರ್ಟ್ ಗಳನ್ನು ದಾಖಲಿಸಿ ವಲಯ ಅರಣ್ಯಾಧಿಕಾರಿಗಳ ವರದಿಯೊಂದಿಗೆ ಈ ನ್ಯಾಯಾಲಯಕ್ಕೆ ಅರಣ್ಯ ಕಾಯ್ದೆ 1963 ಸೆಕ್ಷನ್ 71ಎ ಪ್ರಕಾರ ಕ್ರಮ ಜರುಗಿಸಲು ಹಾಜರುಪಡಿಸಿರುತ್ತಾರೆ. ಈ ಬಗ್ಗೆ ದಿನಾಂಕ: 21.9.90 ರಂದು ಶ್ರೀ ಜೆ.ಬಿ. ನಾಯಕ್, ವಲಯ ಅರಣ್ಯಾಧಿಕಾರಿ, ಚನ್ನಗಿರಿ ಹಾಗೂ ಜಿ. ಸುಬ್ಬರಾವ್ ಬಿನ್ ಹೆಚ್. ಗೋಪಾಲ್, ವನಪಾಲಕ ಸಾಕ್ಷಿ ನುಡಿದಿರುತ್ತಾರೆ. ಸಾಕ್ಷಿದಾರರ ಹೇಳಿಕೆ ಪ್ರಕಾರ ದಿನಾಂಕ: 1.5.89 ರಂದು ನಮಗೆ ಜೋಳದಾಳು ಶಾಖೆಯಲ್ಲಿ ಶ್ರೀಗಂಧ ಕಳ್ಳ ಸಾಗಾಣಿಕೆಯ ವರ್ತಮಾನದ ಮೇರೆಗೆ ಸಿಬ್ಬಂದಿ ಸಂಗಡ ಜೋಳದಾಳು ಗುಳಗಂಡಿ ಪ್ಲಾಂಟೇಶನ್‌ಗೆ ಹೋಗಿ ಮಾವಿನಮರದ ಸ್ವಲ್ಪ ದೂರದಲ್ಲಿ ಕಾಯುತ್ತಾ ಇದ್ದೆವು. ಬೆಳಿಗ್ಗೆ 4.00 ಗಂಟೆಯ ಸಮಯದಲ್ಲಿ ಭದ್ರಾವತಿ ಕಡೆಯಿಂದ ಲಾರಿಯೊಂದು ಬಂದಿತು. ಅದು ದಿಬ್ಬದ ಹತ್ತಿರ ಹೋಗಿ ನಿಂತಿತು. ಕಟ್ಟಿಗೆಯನ್ನು ಲಾರಿಗೆ ತುಂಬುತ್ತಿರುವುದು ಕಂಡು ಬಂತು. ಲಾರಿ ಸಮೀಪ ಹೋಗಿ ನೋಡಲಾಗಿ ನಮ್ಮನ್ನು ಅವರು ನೋಡಿ ಓಡಿಹೋದರು ಮತ್ತು ಲಾರಿಯಲ್ಲಿದ್ದವರು ಡೀಸೆಲ್‌ನ್ನು ಹಾಕಿ ಲಾರಿಗೆ ಬೆಂಕಿಯನ್ನು ಹಾಕಿ ಓಡಿ ಹೋದರು. ಅವರನ್ನು ಹಿಡಿಯಲು ಪ್ರಯತ್ನಪಟ್ಟೆವು. ಆದರೆ ಯಾರೂ ಸಿಗಲಿಲ್ಲ, ಲಾರಿಗೆ ಹತ್ತಿದ ಬೆಂಕಿಯನ್ನು ಸೊಪ್ಪು ಹಾಗೂ ಮಣ್ಣಿನಿಂದ ನಂದಿಸಲಾಯಿತು. ಲಾರಿಯನ್ನು ಪರಿಶೀಲಿಸಲಾಗಿ ಲಾರಿ ಸಂಖ್ಯೆ: ಎಂ.ಇ.ಡಿ. 7098 ಆಗಿದ್ದು, ಶ್ರೀಗಂಧದ ತುಂಡುಗಳಿದ್ದವು. ಸ್ಥಳಕ್ಕೆ ಪಂಚರನ್ನು ಕರೆದುಕೊಂಡು ಹೋಗಿ ಲಾರಿಯನ್ನು ಪರಿಶೀಲಿಸಲಾಗಿ 82 ಶ್ರೀಗಂಧದ ತುಂಡುಗಳಿದ್ದವು. ಅವುಗಳಿಗೆ ಬಿಳಿ ಬಣ್ಣದಿಂದ ನಂಬರು ಕೊಟ್ಟು ಇಲಾಖಾ ಛಾಪಾ ಕೆ.ಎಸ್.ಎಫ್.ಡಿ. ಯನ್ನು ಹಾಕಿದೆವು. ಲಾರಿ ಮತ್ತು ಶ್ರೀಗಂಧದ ತುಂಡುಗಳನ್ನು ವಶಪಡಿಸಿಕೊಂಡು ಅದನ್ನು ಪಂಚರ ಸಮಕ್ಷ ಸ್ಥಳ ಮಹಜರ್ ನಡೆಸಲಾಯಿತು. ಸ್ಥಳ ಮಹಜರನ್ನು ನಿಶಾನೆ ಪಿ1 ಎಂದು, ಹಾಗೂ ಸಾಕ್ಷಿದಾರರ ಸಹಿಯನ್ನು ಕ್ರಮವಾಗಿ ಪಿ1ಎ ಮತ್ತು ಪಿ1ಬಿ ಎಂದು ಗುರುತಿಸಿಕೊಂಡಿರುತ್ತಾರೆ. ನಂತರ ಶ್ರೀಗಂಧದ ತುಂಡುಗಳು ಮತ್ತು ವಾಹನವನ್ನು ಕಚೇರಿ ಆವರಣಕ್ಕೆ ತಂದು ಪ್ರಥಮ ಮಾಹಿತಿ ವರದಿ ತಯಾರಿಸಿ ಎಫ್.ಓ.ಸಿ. ಸಂಖ್ಯೆ: 48/89 ನ್ನು ದಾಖಲು ಮಾಡಿರುತ್ತದೆ. ಪ್ರಕರಣಕ್ಕೆ ಸಂಬಂಧಪಟ್ಟ ದಾಖಲಾತಿಗಳನ್ನು ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ನ್ಯಾಯಾಲಯಕ್ಕೆ ಅರಣ್ಯ ಕಾಯ್ದೆ 71-ಎ ಪ್ರಕಾರ ಕ್ರಮ ಜರುಗಿಸಲು ಹಾಜರುಪಡಿಸಲಾಯಿತು ಎಂದು ಹೇಳಿಕೆ ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರು ಮಾಡಿದ ಪಾಟೀ ಸವಾಲಿನಲ್ಲಿ ನಾನು ಜಂಗಲಿಗೆ ಜೋಳದಾಳಿನಿಂದ ನಡೆದು ಹೋಗಿದ್ದೆನು. ಸುಮಾರು ಒಂದು ಕಿ.ಮೀ. ದೂರವಿದೆ, ನಾವು ಒಟ್ಟು 14 ಜನರಿದ್ದೆವು. ಸಿಬ್ಬಂದಿ ಸಮೇತ ನಾವು 14 ಜನಗಳು ಸಣ್ಣ ಸಣ್ಣ ಗುಂಪುಗಳಾಗಿ ವಿಂಗಡಿಸಿದ್ದೆವು. ನಾವು ಇದ್ದ ಸ್ಥಳದಿಂದ ಸುಮಾರು 100 ಮೀಟರ್ ಅಂತರದಲ್ಲಿ ಲಾರಿ ಬಂದು ನಿಂತಿತು. ಲಾರಿಯಲ್ಲಿ ಎಷ್ಟು ಜನರಿದ್ದರು ಎಂಬುದು ನಿಖರವಾಗಿ ಹೇಳಲು ಸಾಧ್ಯವಿಲ್ಲ. ನಾವು ಶ್ರೀಗಂಧ ದಾಸ್ತಾನಿದ್ದ ಸ್ಥಳವನ್ನು ನೋಡಿರಲಿಲ್ಲ. ಸ್ಥಳವು ಸ್ಟೇಟ್ ಫಾರೆಸ್ಟ್ ಆಗಿತ್ತು. ದೂರದಿಂದ ವಸ್ತುಗಳನ್ನು ಹೊತ್ತುಕೊಂಡು ಲಾರಿಗೆ ತುಂಬುತ್ತಿದ್ದರು. ಕತ್ತಲಾದ್ದರಿಂದ ನಿಖರವಾಗಿ ಗೊತ್ತಾಗುತ್ತಿರಲಿಲ್ಲ. ಲಾರಿಗೆ 3 ಕಡೆಯಿಂದಲೂ ಲೋಡ್ ಮಾಡುತ್ತಿದ್ದರು. ನಾವು ಲಾರಿಯ ಹತ್ತಿರ ಹೋದಾಗ ಯಾವುದೇ ಅಪರಾಧಿಗಳನ್ನು ಹಿಡಿಯಲು ಆಗಲಿಲ್ಲ. ಅಲ್ಲಿದ್ದವರೇ ಕೆಲವರು ಲಾರಿಗೆ ಡೀಸೆಲ್ ಹಾಕಿ ಬೆಂಕಿ ಹಚ್ಚಿರುತ್ತಾರೆ. ಲಾರಿಗೆ ಬೆಂಕಿ ಬಿದ್ದಾಗ ನಾವುಗಳು ಸುಮಾರು 50 ಮೀಟರ್ ದೂರದಲ್ಲಿ ಇದ್ದೆವು. 6.30ರ ಸಮಯದಲ್ಲಿ ಪಂಚಾಯ್ತಿದಾರರನ್ನು ಇಲಾಖಾ ಲಾರಿಯಲ್ಲಿ ಕರೆಸಿಕೊಂಡು ಬಂದೆವು. ಮಹಜರನ್ನು ಪಂಚಾಯ್ತಿದಾರರು ಬಂದ ಮೇಲೆ 7.00 ಗಂಟೆಗೆ ಶುರು ಮಾಡಿ 10.00 ಗಂಟೆಯವರೆಗೆ ಬರೆಯಲಾಯಿತು. ರಸ್ತೆಯಲ್ಲಿ ಹೋಗುತ್ತಿದ್ದ ಲಾರಿಯನ್ನು ತೆಗೆದುಕೊಂಡು ಹೋಗಿ ಸುಳ್ಳು ಕೇಸು ಹಾಕಿದ್ದು ಎಂದು ಹೇಳುವುದು ನಾನು ಒಪ್ಪುವುದಿಲ್ಲ. ಮಹಜರನ್ನು ಕಚೇರಿಯಲ್ಲಿ ಕುಳಿತು ಬರೆದಿರುವುದು ಎಂದು ಹೇಳುವುದು ಸರಿಯಲ್ಲ. ಶ್ರೀಗಂಧ ತುಂಬಲು ಬಂದಿದೆ ಎಂದು ಲಾರಿಯನ್ನು ಸುಟ್ಟಿರುವುದು ಎಂದು ಹೇಳುವುದು ಸರಿಯಲ್ಲ ಎಂದು ಸಾಕ್ಷಿದಾರರು ಪಾಟೀ ಸವಾಲಿನಲ್ಲಿ ಸಾಕ್ಷಿ ನುಡಿದಿರುತ್ತಾರೆ.

ದಿನಾಂಕ: 26.10.90 ರಂದು 1) ಶ್ರೀ ಚಂದ್ರಪ್ಪ ಬಿನ್ ಮಹದೇವಪ್ಪ ಹಾಗೂ 2) ಶ್ರೀ ವೆಂಕಟಪ್ಪ ಬಿನ್ ಸಂಕಪ್ಪ, ಪಂಚಾಯ್ತಿದಾರರು ಈ ನ್ಯಾಯಾಲಯಕ್ಕೆ ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ವಲಯ ಅರಣ್ಯಾಧಿಕಾರಿ, ಚನ್ನಗಿರಿ ಮತ್ತು ಸಿಬ್ಬಂದಿಯವರು ಜೋಳದಾಳು ಹತ್ತಿರ ಮಾವಿನ ಮರ ದಿಬ್ಬದ ಬಳಿ ಅರಣ್ಯ ಅಪರಾಧ ಪ್ರಕರಣದ ವಿಚಾರಣೆ ಕುರಿತು ಪಂಚಾಯ್ತಿದಾರರಾಗಿ ಕರೆದುಕೊಂಡು ಹೋದರು. ಸುಮಾರು 7.00 ಗಂಟೆಯಾಗಿತ್ತು. ನಾವು ಸ್ಥಳಕ್ಕೆ ಹೋದಾಗ ಲಾರಿಯಲ್ಲಿ ಶ್ರೀಗಂಧವನ್ನು ತುಂಬಿತ್ತು. ಲಾರಿಯ ಸಂಖ್ಯೆ: ಎಂ.ಇ.ಡಿ. 7098 ಒಟ್ಟು ಶ್ರೀಗಂಧದ ತುಂಡುಗಳು 82 ಇದ್ದು, ಅವುಗಳಿಗೆ ಸಂಖ್ಯೆಯನ್ನು ನೀಡಿ ಪಂಚನಾಮೆಯನ್ನು ಬರೆದು ನಂತರ ಇಲಾಖಾ ಲಾರಿಯ ಸಂಗಡ ಆ ಪ್ರಕರಣದ ಲಾರಿಯನ್ನು ಎಳೆದುಕೊಂಡು ಕಚೇರಿಗೆ ತೆಗೆದುಕೊಂಡು ಹೋದರು. ಪಂಚನಾಮೆಯಲ್ಲಿರುವ ಸಹಿಯನ್ನು ಕ್ರಮವಾಗಿ ನಿಶಾನೆ ಪಿ1ಸಿ ಮತ್ತು ಪಿ1ಡಿ ಎಂದು ಗುರುತಿಸಿಕೊಂಡಿರುತ್ತಾರೆ. ಅರ್ಜಿದಾರರ ಪರ ವಕೀಲರು ಮಾಡಿದ ಪಾಟೀ ಸವಾಲಿನಲ್ಲಿ ನಾವು ಜೋಳದಾಳು ಮನೆಯಲ್ಲಿಯೇ ಇದ್ದೆವು. ಸದರಿ ಸ್ಥಳವು ಜೋಳದಾಳುನಿಂದ 1 ಕಿ.ಮೀ. ದೂರವಿದೆ. ನಾವು ಸದರಿ ಸ್ಥಳಕ್ಕೆ ನಡೆದುಕೊಂಡು ಹೋದೆವು. ಇಲಾಖೆಯವರು ಯಾವ ರೀತಿ ಹೋದರೆಂಬುದು ನಮಗೆ ಗೊತ್ತಿಲ್ಲ. ನಮ್ಮನ್ನು ಜೋಳದಾಳು ವನಪಾಲಕ ಕರೆದರು. ಪಂಚನಾಮೆಯನ್ನು ಇಲಾಖೆಯವರೇ ಬರೆದಿರುವುದು, ಆದರೆ ಯಾರು ಬರೆದರು ನಮಗೆ ಗೊತ್ತಿರುವುದಿಲ್ಲ. ನಮಗೂ ವನಪಾಲಕರಿಗೂ ಪರಿಚಯ ಹೊರತು ಯಾವುದೇ ಸಂಬಂಧ ಇರುವುದಿಲ್ಲ. ನಾವು ಘಟನೆಯನ್ನು ನೋಡಿರುವುದಿಲ್ಲ ಎಂದು ಹೇಳುವುದು ಸತ್ಯಕ್ಕೆ ದೂರ.

ಮೇಲ್ಕಂಡ ಎಲ್ಲಾ ಸಾಕ್ಷಿದಾರರ ಹೇಳಿಕೆಗಳನ್ನು ಗಮನಿಸಿದಾಗ ಈ ಪ್ರಕರಣಕ್ಕೆ ಸಂಬಂಧಿಸಿದ ಲಾರಿಯಲ್ಲಿ ಅಕ್ರಮ ಶ್ರೀಗಂಧ ಸಾಗಾಣಿಕೆ ಆಗಿರುವುದು ದೃಢಪಟ್ಟಿರುತ್ತದೆ. ಸಾಕ್ಷಿದಾರರು ನೀಡಿರುವ ಹೇಳಿಕೆಗಳು ಹಾಗೂ ಸ್ಥಳ ಪಂಚನಾಮೆಯಲ್ಲಿರುವ ಅಂಶಗಳು ಒಂದಕ್ಕೊಂದು ತಾಳೆ ಹೊಂದಿದ್ದು ಯಾವುದೇ ವ್ಯತಿರಿಕ್ತ ಹೇಳಿಕೆಗಳು ಬಂದಿರುವುದಿಲ್ಲ. ಅವರುಗಳು ನುಡಿದ ಸಾಕ್ಷಿಯು ನಂಬುವಂತಾಗಿರುತ್ತದೆ. ಅಲ್ಲದೇ ಪಾಟೀ ಸವಾಲಿನಲ್ಲಿಯೂ ಸಹ ಅರ್ಜಿದಾರರ ಪರ ವಕೀಲರು ಮಾಡಿದ ಪ್ರಶ್ನೆಗಳಿಗೆ ಸೂಕ್ತವಾದ

ಉತ್ತರವನ್ನು ನೀಡಿರುತ್ತಾರೆ. ಹಾಗೂ ಅರ್ಜಿದಾರರ ವಾಹನದಲ್ಲಿ ಅಕ್ರಮವಾಗಿ ಶ್ರೀಗಂಧ ಸಾಗಾಣಿಕೆಗೆ ಬಳಸಿರುವುದು ದೃಢಪಟ್ಟಿರುತ್ತದೆ. ಹಾಗೂ 1963ನೇ ಕರ್ನಾಟಕ ಅರಣ್ಯ ವಿಧಿ 84, 86 ಹಾಗೂ 87, 1969ನೇ ಕರ್ನಾಟಕ ಅರಣ್ಯ ಕಾಯ್ದೆ ನಿಯಮ 154ನೇ, 155 ಮತ್ತು 157 ಮತ್ತು 71(ಎ) ನಿಯಮವನ್ನು ಉಲ್ಲಂಘಿಸಲಾಗಿರುತ್ತದೆ. ಈ ಮೇಲಿನ ಅಂಶ ಹಾಗೂ ಕಾರಣಗಳಿಂದ ಒಂದನೇ ಅಂಶಕ್ಕೆ ನನ್ನ ಉತ್ತರ ಹೌದು ಎಂಬುದಾಗಿದೆ.

**ಅಂಶ-2:**

ಈ ಪ್ರಕರಣದಲ್ಲಿ ಅಮಾನತ್ತುಪಡಿಸಿದ ಅಶೋಕ ಲೈಲ್ಯಾಂಡ್ ಲಾರಿ ಸಂ: ಎಂಇಡಿ 7098 ರ ಮಾಲೀಕರಾದ ಶ್ರೀ ಪ್ರಕಾಶ ಚಂದ್ ಬಿನ್ ಮಧುರಾ ಪ್ರಸಾದ್, ಬೆಂಗಳೂರು ಇವರು ದಿನಾಂಕ: 15.5.89 ರಂದು ಈ ಪ್ರಾಧಿಕಾರದಲ್ಲಿ ವಾಹನವನ್ನು ಮಧ್ಯಂತರ ಸ್ವಾಧೀನಕ್ಕೆ ಬಿಡುಗಡೆ ಮಾಡಲು ಕೋರಿ ಅರ್ಜಿ ಸಲ್ಲಿಸಿದ್ದು, ವಾಹನದ ಮಾಲೀಕರಿಗೆ ಅರಣ್ಯ ಕಾಯ್ದೆ 1963 ಸೆಕ್ಷನ್ 71(ಬಿ) ಪ್ರಕಾರ ದಿನಾಂಕ: 30.8.89 ರಂದು ಕಾರಣ ಕೇಳಿ ತಿಳುವಳಿಕೆ ಪತ್ರ ನೀಡಿರುತ್ತದೆ. ಅರ್ಜಿದಾರರು ಅವರ ವಕೀಲರ ಮುಖಾಂತರ ದಿನಾಂಕ: 7.9.89 ರಂದು ಸಮಜಾಯಿಸಿ ನೀಡಿರುತ್ತಾರೆ. ಅವರ ಸಮಜಾಯಿಸಿಯನ್ನು ಪರಿಶೀಲಿಸಿ ಈ ಪ್ರಕರಣದಲ್ಲಿ ವಾಹನ ಮಾಲೀಕರಿಗೆ ವಿಚಾರಣೆಗೆ ಹಾಜರಾಗಲು ನೋಟೀಸ್ ನೀಡಿರುತ್ತಾರೆ. ವಾಹನದ ಮಾಲೀಕರು ದಿನಾಂಕ: 6.12.91 ರಂದು ನ್ಯಾಯಾಲಯಕ್ಕೆ ಹಾಜರಾಗಿ ಸಾಕ್ಷಿ ನುಡಿದಿರುತ್ತಾರೆ. ಲಾರಿ ನಂ. ಎಂ.ಇ.ಡಿ. 7098 ರ ಆರ್.ಸಿ. ಮಾಲೀಕನಾಗಿರುತ್ತೇನೆ. ದಿನಾಂಕ: 19.4.1989 ರಂದು ಬೆಂಗಳೂರು ಚಾಮರಾಜಪೇಟೆ ಈದ್ಗಾ ಮೈದಾನದಲ್ಲಿ ವಾಹನ ನಿಲ್ಲಿಸಿದಾಗ ನನ್ನ ಸ್ನೇಹಿತ ಇಕ್ಬಾಲ್ ಸಂಜೆ 5.30 ಗಂಟೆಗೆ ಬಂದನು. ಅವನು ಮೈಸೂರು ಹತ್ತಿರ ಬೆಳಗೋಳಕ್ಕೆ ವೇಸ್ಟ್ ಪೇಪರ್ ಲೋಡ್ ಇದೆಯೆಂದು ತಿಳಿಸಿದನು. ಹಾಗೂ 800 ರೂ ಬಾಡಿಗೆ ಕೊಡಿಸುವುದಾಗಿ ತಿಳಿಸಿದನು. ಮಾಮೂಲಿ ವಾಹನ ಚಾಲಕನು ರಜೆಯ ಮೇಲೆ ಹೋದ್ದರಿಂದ ಬೇರೆ ಲಾರಿ ಚಾಲಕನ ಸಂಗಡ ಲಾರಿಯನ್ನು ಬಾಡಿಗೆ ಕಳುಹಿಸಿ ದಿನಾಂಕ: 21.4.1989 ರಂದು ವಾಪಸ್ಸು ಬರಬೇಕು ಎಂದು ತಿಳಿಸಿದೆ. ಲಾರಿಯು ವಾಪಸ್ಸು ಬಾರದೇ ಇದ್ದುದರಿಂದ ನಾನು ಮತ್ತು ಫೈನಾನ್ಸ್ ವಿಭಾಗದವರು ಲಾರಿಯ ಬಗ್ಗೆ ಹುಡುಕಿದೆವು. ಅದು ಪತ್ತೆ ಆಗಿರುವುದಿಲ್ಲ. 3.5.89 ರಂದು ಪೊಲೀಸ್ ಠಾಣೆಯಲ್ಲಿ ದೂರು ಸಲ್ಲಿಸಿದ್ದು, ಅದನ್ನು ನಿಶಾನೆ ಡಿ1 ಎಂದು ಗುರುತಿಸಲಾಯಿತು. ಪೊಲೀಸ್‌ನವರು ನೀಡಿದ ಎಫ್.ಐ.ಆರ್. ಕಾಪಿಯನ್ನು ನಿಶಾನೆ ಡಿ2 ಎಂದು ಗುರುತಿಸಿರುತ್ತದೆ. ಸದರಿ ವಾಹನವನ್ನು ಅರಣ್ಯ ಇಲಾಖೆಯವರು ಸೀಜ್ ಮಾಡಿರುತ್ತಾರೆ ಎಂದು ಪೊಲೀಸ್‌ನವರು ತಿಳಿಸಿರುತ್ತಾರೆ. ಇನ್ಸೂರೆನ್ಸ್ ಹಾಗೂ ಆರ್.ಸಿ. ಪುಸ್ತಕದ ಛಾಯಾ ಪ್ರತಿಯನ್ನು ಹಾಜರುಪಡಿಸಿದ್ದು ನಿಶಾನೆ ಡಿ3 ಎಂದು ಗುರುತಿಸಿರುತ್ತದೆ. ವಾಹನವನ್ನು ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ.

ವಾಹನದ ಮಾಲೀಕರಿಗೆ ಅಭಿಯೋಜನೆವತಿಯಿಂದ ಮಾಡಿದ ಪಾಟೀ ಸವಾಲಿಗೆ ನಾನು ಮತ್ತು ಇಕ್ಬಾಲ್ ಇಬ್ಬರು ಗೆಳೆಯರು, ಇಕ್ಬಾಲ್ ಮೊದಲು ನನ್ನ ಮನೆಯ ಹತ್ತಿರ ಬಾಡಿಗೆಗೆ ಇದ್ದರು. ಇಕ್ಬಾಲನು ಮಾರ್ಕೆಟ್‌ನಲ್ಲಿ ಲೋಡಿಂಗ್, ಅನ್‌ಲೋಡಿಂಗ್ ಕೆಲಸ ಮಾಡುತ್ತಿದ್ದನು. ಇಕ್ಬಾಲ್ ಸ್ವಂತ ಸ್ಥಳ ಆಂಧ್ರಪ್ರದೇಶ. ಇಕ್ಬಾಲ್‌ಗೆ ವಾಹನ ನಡೆಸಲು ಬರುವುದಿಲ್ಲ. ಇವರು 19.4.89ರ ಮೊದಲು ಯಾವಾಗಲೂ ನನ್ನ ಗಾಡಿಯನ್ನು ತೆಗೆದುಕೊಂಡು ಹೋಗಿರುವುದಿಲ್ಲ. ನಾನು ಯಾವುದೇ ಲಾರಿಗೆ ಸಂಬಂಧಪಟ್ಟ ದಾಖಲಾತಿಯನ್ನು ನೀಡಿರಲಿಲ್ಲ. ಲಾರಿಗೆ ಸಂಬಂಧಿಸಿದ ದಾಖಲಾತಿಗಳು ಫೈನಾನ್ಸ್‌ರ ಹತ್ತಿರ ಇದ್ದವು. ಷರೀಫ್ ವಾಹನ ಚಾಲಕನ ಹೆಸರನ್ನು ಗಾಡಿಯನ್ನು ತೆಗೆದುಕೊಂಡು ಹೋಗುವ ಮೊದಲೇ ತಿಳಿಸಿದನು. ಷರೀಫ್ ಹತ್ತಿರ ಡ್ರೈವಿಂಗ್ ಲೈಸೆನ್ಸ್ ಇದೆ ಎಂಬುದು ನಾನು ನೋಡಿರುವುದಿಲ್ಲ. ವಾಹನ ಕಾಯ್ದೆ ಪ್ರಕಾರ ಡ್ರೈವಿಂಗ್ ಲೈಸೆನ್ಸ್ ಇಲ್ಲದೇ ವಾಹನವನ್ನು ನೀಡಿದರೆ ಮಾಲೀಕರ ಮೇಲೆ ಅಪರಾಧ ಎಂಬುದು ನನಗೆ ಗೊತ್ತಿರುವುದಿಲ್ಲ. ವೇಸ್ಟ್ ಪೇಪರನ್ನು ಚಾಮರಾಜಪೇಟೆಯಿಂದ ಬೆಳಗೋಳಕ್ಕೆ ಪೇಪರ್ ತೆಗೆದುಕೊಂಡು ಹೋಗಿತ್ತು. ಬೆಳಗೋಳ ಕಾರ್ಖಾನೆಯಲ್ಲಿ ವೇಸ್ಟ್ ಪೇಪರ್ ಲೋಡ್ ಎಂಟ್ರಿ ಆಗಿರಬಹುದು. ನನಗೆ ಗೊತ್ತಿರುವುದಿಲ್ಲ. ನಾನು ಆಂಧ್ರಪ್ರದೇಶಕ್ಕೆ ಹೋಗಿಲ್ಲ. ನಾನು 3-4 ದಿವಸ ಕಾಯ್ದು ಲಾರಿ ಬಾರದೇ ಇದ್ದುದರಿಂದ ಫೈನಾನ್ಸ್ ಜೊತೆ ಲಾರಿಯನ್ನು ಹುಡುಕಿದೆನು. ಗಂಧದ ಸಾಗಾಣಿಕೆ ಮಾಡುವುದರಿಂದ ಹೆಚ್ಚಿಗೆ ಬಾಡಿಗೆ ಬರುತ್ತದೆ ಎಂಬುದು ಸತ್ಯಕ್ಕೆ ದೂರ. ಶ್ರೀಗಂಧದ ಸಾಗಾಣಿಕೆಯಲ್ಲಿ ಲಾರಿ ಸಿಕ್ಕಿದೆ ಎಂಬುದು ಗೊತ್ತಾದ ಮೇಲೆ ಪೊಲೀಸ್‌ನವರಿಗೆ ದೂರು ಕೊಟ್ಟೆ ಎಂಬುದು ಸತ್ಯಕ್ಕೆ ದೂರ. ನನ್ನ ವಾಹನ ಅಕ್ರಮ ಶ್ರೀಗಂಧ ಸಾಗಾಣಿಕೆಯಲ್ಲಿ ಚನ್ನಗಿರಿಯಲ್ಲಿ ಸೀಜ್ ಮಾಡಿದೆ ಎಂಬುದು ನಿಜ. ನನ್ನ ಒಪ್ಪಿಗೆ ಮೇಲೆ ಶ್ರೀಗಂಧದ ಸಾಗಾಣಿಕೆ ನಡೆದಿದೆ ಎಂಬುದು ಸತ್ಯಕ್ಕೆ ದೂರ ಎಂದು ಹೇಳಿಕೆ ನೀಡಿರುತ್ತಾರೆ.

ವಾಹನದ ಮಾಲೀಕರ ಹೇಳಿಕೆಯನ್ನು ಪರಿಶೀಲಿಸಿದಾಗ ಈ ಕೆಳಕಂಡ ಅಂಶಗಳು ಗಣನೆಗೆ ತೆಗೆದುಕೊಂಡಿರುತ್ತೇನೆ.

(1) ವಾಹನದ ಮಾಲೀಕರು ವಾಹನವನ್ನು ಯಾವುದೇ ವಿಚಾರ ತಿಳಿಯದ ಒಬ್ಬ ಚಾಲಕರಿಗೆ ಕೊಟ್ಟಿರುವುದು ನಂಬಲು ಬರುವುದಿಲ್ಲ.

(2) ಪ್ರಕರಣ ನಡೆದ ನಂತರ ಪೊಲೀಸ್ ಠಾಣೆಯಲ್ಲಿ ಕಂಪ್ಲೇಂಟ್ ನೀಡಿರುವುದು ಕಂಡು ಬಂದಿರುತ್ತದೆ.

(3) ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಇಕ್ಬಾಲ್ ಬಾಡಿಗೆಗೆ ವಾಹನ ತೆಗೆದುಕೊಂಡು ಹೋದ ಬಗ್ಗೆ ಯಾವುದೇ ಸಾಕ್ಷ್ಯಾಧಾರವನ್ನು ನ್ಯಾಯಾಲಯಕ್ಕೆ ಹಾಜರುಪಡಿಸಿರುವುದಿಲ್ಲ.

ಈ ರೀತಿ ಅರ್ಜಿದಾರರು / ವಾಹನದ ಮಾಲೀಕರು ಯಾವುದೇ ಸಾಕ್ಷ್ಯಾಧಾರಗಳನ್ನು ಒದಗಿಸದೇ ಅವರ ಅರ್ಜಿಯಲ್ಲಿ ತಿಳಿಸಿರುವ ವಿಷಯಗಳು ಒಂದು ಕಟ್ಟುಕತೆ ಎಂಬುದಕ್ಕೆ ಯಾವುದೇ ಸಂಶಯವಿಲ್ಲ. ಅರ್ಜಿದಾರರು ಹೆಚ್ಚಿನ ಹಣದ ಆಸೆಗೋಸ್ಕರ ವಾಹನವನ್ನು ಶ್ರೀಗಂಧದ ಸಾಗಾಣಿಕೆಯಲ್ಲಿ ತೊಡಗಿಸಿರುವುದು, ಅವರು ನ್ಯಾಯಾಲಯಕ್ಕೆ ನೀಡಿದ ಹೇಳಿಕೆಯಿಂದ ತಿಳಿದು ಬಂದಿರುತ್ತದೆ. ಆದ್ದರಿಂದ ಅಂಶ-2 ನ್ನು ಇಲ್ಲ ಎಂದು ಪರಿಗಣಿಸಲಾಯಿತು.

ಅರಣ್ಯ ಮೊಕದ್ದಮೆಗಳಲ್ಲಿ ಭಾಗಿಯಾದ ಯಾವುದೇ ವಾಹನದ, ವಾಹನ ಮಾಲೀಕರು, ತಾವು ಸದರಿ ಕಳ್ಳ ಸಾಗಾಣಿಕೆಯಲ್ಲಿ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಭಾಗಿಯಾಗಿಲ್ಲವೆಂದು ಪುರಾವೆ ಮಾಡಬೇಕಾಗುತ್ತದೆ. ಜೊತೆಗೆ ಸದರಿ ವಾಹನ ಯಾರ ಸ್ವಾಧೀನದಲ್ಲಿತ್ತೋ ಆತನು ಸಹ ಕಳ್ಳ ಸಾಗಾಣಿಕೆಯಲ್ಲಿ ನೇರವಾಗಿ ಭಾಗಿಯಾಗಿಲ್ಲ ಎಂಬುದನ್ನು ಪುರಾವೆ ಮಾಡಬೇಕಾಗುತ್ತದೆ ಹಾಗೂ ಅಕ್ರಮ ಕಳ್ಳ ಸಾಗಾಣಿಕೆಯಲ್ಲಿ ತಮ್ಮ ವಾಹನ ತೊಡಗದಂತೆ, ಯಾವ ಯಾವ ಕ್ರಮಗಳನ್ನು ತೆಗೆದುಕೊಂಡಿರುತ್ತಾರೆ ಎಂಬುದನ್ನು ಸಹ

ಸಾಬೀತುಪಡಿಸಬೇಕಾಗುತ್ತದೆ ಎಂದು ತಿಳಿಸುತ್ತದೆ. ಆದರೆ ಹಾಲಿ ಈ ಪ್ರಕರಣದಲ್ಲಿ ಮಾಲೀಕರು ಇವುಗಳನ್ನು ಪುರಾವೆ ಮಾಡುವಲ್ಲಿ ವಿಫಲರಾಗಿರುತ್ತಾರೆ. ಇದಕ್ಕೆ ಸಂಬಂಧಿಸಿದಂತೆ ಕರ್ನಾಟಕ ಲಾ ಜನರಲ್ ಪುಟ 563 ರಲ್ಲಿ ಕ್ರೈಮ್ಸ್ 2000 (3) ಕೇರಳ ಹೈಕೋರ್ಟ್ ನಲ್ಲಿ ಕೇರಳ ರಾಜ್ಯ ವರ್ಸಸ್ ಮರೀನಾ ವರ್ಗೀಸ್ ಪ್ರಕರಣದಲ್ಲಿ ಮಾನ್ಯ ನ್ಯಾಯಾಲಯವು ನೀಡಿದ ತೀರ್ಪಿನ ಉದ್ಧೃತ ಭಾಗ ಕೆಳಕಂಡಂತಿರುತ್ತದೆ.

The contention that such a strict view would adversely affect an innocent vehicle owner cannot be countenanced since any narrow or liberal interpretation of confiscatory provisions in the Act can eventually lead to disastrous consequences for forest wealth which is a very endangered bounty of nature. The idea behind extension of confiscatory provisions to vehicles etc., is to convey a pre-emptory and explicit message to the vehicle owners not to allow their vehicles to be used for depletion of forest wealth. If any vehicle is cought in the nefarious act of carrying illicit forest produce, it is not enough that the owner establishes his innocence alone. If he wants to retrieve his vehicle he must show further that the person who was incharge of the vehicle has taken reasonable and necessary precautionary measures against such user of the vehicle. The owner cannot rest with establishing his innocence in the matter. It may be that having succeeded in showing his innocence his failure to establish the next limb might lead to hard consequences to him. Legislature intended by providing such stringent conditions, to prevent harder consequences for the society and for the posterity."

ಮೇಲೆ ಹೇಳಿದ ಕಾರಣಗಳಿಂದ ಸದರಿ ಪ್ರಕರಣದಲ್ಲಿ ಅರ್ಜಿದಾರರ ವಾಹನ ಅಕ್ರಮ ಶ್ರೀಗಂಧದ ಕಳ್ಳ ಸಾಗಾಣಿಕೆಯಲ್ಲಿ ಭಾಗಿಯಾಗಿರುವುದು ನಿಸ್ಸಂದೇಹವಾಗಿ ಪುರಾವೆಯಾಗಿರುತ್ತದೆ. ಮತ್ತು ಅರ್ಜಿದಾರರು ತಮ್ಮ ವಾಹನ ಅಕ್ರಮ ಕಳ್ಳಸಾಗಾಣಿಕೆಯಲ್ಲಿ ಭಾಗಿಯಾಗಿಲ್ಲ ತನ್ನ ಅಣತಿಯ ಮೇರೆ ಭಾಗಿಯಾಗಿಲ್ಲ, ಇಲ್ಲವೇ ತನ್ನ ಏಜೆಂಟರ್ ಅಣತಿಯ ಮೇರೆ ಭಾಗಿಯಾಗಿಲ್ಲ ಎಂಬ ಜವಾಬ್ದಾರಿಯನ್ನು ಜವಾಬ್ದಾರಿಯುತವಾಗಿ ನಿರ್ವಹಿಸಿರುವುದಿಲ್ಲ. ಇದರಿಂದ ಅರ್ಜಿದಾರರ ವಾಹನ, ವಾಹನ ಮಾಲೀಕರಿಗೆ ಗೊತ್ತಿದ್ದಂತೆ ಅಕ್ರಮ ಕಳ್ಳಸಾಗಾಣಿಕೆಯಲ್ಲಿ ಭಾಗಿಯಾಗಿರುತ್ತೆ ಎಂದು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಿರುತ್ತದೆ.

## ಅಂತಿಮ ಆದೇಶ

ಈ ಮೇಲ್ಕಾಣಿಸಿದ ಎಲ್ಲಾ ಅಂಶಗಳನ್ನು ಕೂಲಂಕುಶವಾಗಿ ಪರಿಶೀಲಿಸಿ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ಶ್ರೀಮತಿ ಸೀಮಾ ಗರ್ಗ್, ಭಾ.ಅ.ಸೇ., ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಭದ್ರಾವತಿ ವಿಭಾಗ, ಭದ್ರಾವತಿ ಆದ ನಾನು ಅರಣ್ಯ ಕಾಯ್ದೆ 1963ರ ಸೆಕ್ಷನ್ 71-ಎ (2)ನೇ ತಿದ್ದುಪಡಿ ಪ್ರಕಾರ ಲಾರಿ ನೋಂದಾವಣೆ ಸಂಖ್ಯೆ: ಎಂ.ಇ.ಡಿ. 7098 ನ್ನು (ಇಂಜಿನ್ ನಂ. ALI 966144 ಛಾಸ್ಸಿ ನಂ. ALI 7787044) ಮತ್ತು ಅದರಲ್ಲಿ ಅಕ್ರಮವಾಗಿ ಸಾಗಾಣಿಕೆಗೆ ಸಿದ್ದವಾಗಿದ್ದ ಶ್ರೀಗಂಧದ ತುಂಡುಗಳು 82=ಒಟ್ಟು 560 ಕೆ.ಜಿ. ಯನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಆದೇಶ ಹೊರಡಿಸಿರುತ್ತೇನೆ.

ಈ ಆದೇಶದ ವಿರುದ್ಧ ಮೇಲ್ಮನವಿ ಸಲ್ಲಿಸುವುದಾದಲ್ಲಿ ಈ ಆದೇಶ ಹೊರಡಿಸಿದ 30 ದಿವಸಗಳೊಳಗೆ ಸಲ್ಲಿಸಬಹುದಾಗಿದೆ. ತಪ್ಪಿದಲ್ಲಿ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ. ಅಲ್ಲದೇ ಮೇಲ್ಮನವಿ ಅವಧಿ ಮೀರಿದ ಬಳಿಕ ವಾಹನ ಹಾಗೂ ಶ್ರೀಗಂಧದ ತುಂಡುಗಳನ್ನು ಕಾನೂನು ರೀತ್ಯ ವಿಲೇ ಮಾಡಲು ಕೂಡ ಆದೇಶಿಸಿದೆ.

ಈ ಆದೇಶವನ್ನು ಈ ದಿನ ದಿನಾಂಕ: 11.8.2004 ರಂದು ನ್ಯಾಯಾಲಯದ ಮೊಹರು ಹಾಗೂ ನನ್ನ ಸಹಿಯೊಂದಿಗೆ ಹೊರಡಿಸಿರುತ್ತದೆ.

## ಅನುಬಂಧ

### ಫಿರ್ಯಾದಿದಾರರ ಸಾಕ್ಷಿಗಳ ವಿಚಾರಣೆ

ಎ) ಪಿಡಬ್ಲ್ಯು 1 ಜೆ.ಬಿ. ನಾಯಕ್, ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಕೋಲಾರ

ಬಿ) ಪಿಡಬ್ಲ್ಯು 2 ಜಿ. ಸುಬ್ಬರಾವ್, ವನಪಾಲಕರು, ಚಿಕ್ಕಮಗಳೂರು

ಸಿ) ಪಿಡಬ್ಲ್ಯು 3 ಎಂ. ಚಂದ್ರಪ್ಪ ಬಿನ್ ಮಹದೇವಪ್ಪ, ಜೋಳದಾಳು ವಾಸಿ, ಚನ್ನಗಿರಿ

ಡಿ) ಪಿಡಬ್ಲ್ಯು 4 ವೆಂಕಟಪ್ಪ ಬಿನ್ ಸಂಕಪ್ಪ, ಜೋಳದಾಳು ವಾಸಿ, ಚನ್ನಗಿರಿ.

**ಫಿರ್ಯಾದಿದಾರರ ಪರ ದಾಖಲಾತಿಗಳ ಪರಿಶೀಲನೆ:**

1. ಪಿ1 ಸ್ಥಳ ಮಹಜರ್
2. ಪಿ1ಎ ಪಿಡಬ್ಲ್ಯು 1 ಸಾಕ್ಷಿದಾರರ ಸಹಿ
3. ಪಿ1ಬಿ ಪಿಡಬ್ಲ್ಯು 2 ಸಾಕ್ಷಿದಾರರ ಸಹಿ
4. ಪಿ1ಸಿ ಪಿಡಬ್ಲ್ಯು 3 ಸಾಕ್ಷಿದಾರರ ಸಹಿ
5. ಪಿ1ಡಿ ಪಿಡಬ್ಲ್ಯು 4 ಸಾಕ್ಷಿದಾರರ ಸಹಿ
6. ಪಿ2 ಪ್ರಥಮ ಮಾಹಿತಿ ವರದಿ
7. ಪಿ2ಎ ಫಿರ್ಯಾದಿದಾರರ ಸಹಿ
8. ಪಿ3 ಸೀಜರ್ ರಿಪೋರ್ಟ್
9. ಪಿ3ಎ ಫಿರ್ಯಾದಿದಾರರ ಸಹಿ
10. ಪಿ4 ವಿಚಾರಣೆ ವರದಿ
11. ಪಿ4ಎ ಫಿರ್ಯಾದಿದಾರರ ಸಹಿ

ಎಕ್ಸಿಬಿಟ್-1

ಅರ್ಜಿದಾರರು ವಾಹನ ತಾತ್ಕಾಲಿಕ ಬಿಡುಗಡೆಗೆ ಸಲ್ಲಿಸಿದ ಅರ್ಜಿ

ಎಕ್ಸಿಬಿಟ್-2

ಅರಣ್ಯ ಕಾಯ್ದೆ 71(ಬಿ) ಕಾರಣ ಕೇಳಿ ತಿಳುವಳಿಕೆ ಪತ್ರಕ್ಕೆ ನೀಡಿದ ಸಮಜಾಯಿಸಿ

**ಅರ್ಜಿದಾರರ ಪರ ದಾಖಲಾತಿಗಳ ಪರಿಶೀಲನೆ:**

1. ಡಿ1 ದಿನಾಂಕ: 3.5.89 ರಂದು ಚಾಮರಾಜಪೇಟೆ ಪೊಲೀಸ್ ಠಾಣೆಯಲ್ಲಿ ವಾಹನ ತಪ್ಪಿಸಿಕೊಂಡ ಬಗ್ಗೆ ನೀಡಿದ ಫಿರ್ಯಾದು.
2. ಡಿ2 ಚಾಮರಾಜಪೇಟೆ ಪೊಲೀಸ್ ಠಾಣೆಯ ಎಫ್.ಐ.ಆರ್.
3. ಡಿ3 ವಾಹನದ ಆರ್.ಸಿ. ಜೆರಾಕ್ಸ್ ಪ್ರತಿ
4. ಡಿ4 ಇನ್ಶೂರೆನ್ಸ್ ಪ್ರತಿ

**ಸೀಮಾ ಗರ್ಗ್**

ಪಿ.ಆರ್. 1215

ಅಧಿಕಾರಿಯುತ ಅಧಿಕಾರಿಗಳು ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಭದ್ರಾವತಿ ವಿಭಾಗ, ಭದ್ರಾವತಿ.

**KARNATAKA POWER TRANSMISSION CORPORATION LIMITED**
**No. SEE/Tr(W&M)/EE(O)/AEE/SSD/1315 Dated 22nd June 2004**

The Karnataka Power Transmission Corporation have formulated a Scheme under 28(A) of the Electricity Supply Act 1948 and the same is herewith published in pursuance of Section 29(ii) of the said Act for information of the License and any other persons interested.

**Particulars of the scheme are as follows:**

| | | |
|---|---|---|
| 1 | Name of the Scheme | Construction of 110 KV Tap line to the proposed 110/11 KV sub-station at Nidagatta in Kadur Tq. From the proposed 110 KV Tap Line to Nagenahalli Sub-Station (Length 6.37 Kms) |
| 2 | Salient features | To improve voltage and Power conditions in and around Nidagatta Village Limits |
| 3 | Areas passing through | Jiganehalli, Byaladahalli, Hanumanthapura, Hochihalli, Nidagatta Limits |
| 4 | Approximate Cost | 66 Lakhs |

The Corporation shall have and shall exercise all power which the telegraphs Authorities possess under Part IIII of the Indian Telegraph Act 1985 (18 of 1985) for carrying out the above Scheme. Objections to the above scheme if any, should be sent to the Superintending Engineer Ele, Transmission (W&M) Circle, KPTCL, Shimoga within two months from the date of publication of the Notification for consideration of the Corporation.

Superintending Engineer Ele
Transmission (W&M) Circle, KPTCL, Shimoga.

**KARNATAKA POWER TRANSMISSION CORPORATION LIMITED**
**No. SEE/Tr(W&M)/EE(O)/AEE/SSD/1315 Dated 22nd June 2004**

The Karnataka Power Transmission Corporation have formulated a Scheme under 28(A) of the Electricity Supply Act 1948 and the same is herewith published in pursuance of Section 29(ii) of the said Act for information of the License and any other person interested.

**Particulars of the scheme are as follows:**

| | | |
|---|---|---|
| 1 | Name of the Scheme | Construction of 110 KV Tap line from Tangali Limits of SBT 110 KV line to the proposed 110/11KV sub-station at Nagenahalli in Kadur Tq. (Length = 17.71 Kms) |
| 2 | Salient features | To improve voltage and Power conditions in and around Nagenahalli (Sakkarayapatna) Hobli in Kadur Tq. |
| 3 | Areas passing through | Tangali, Ballekere, Karadihalli, K.H. Koppalu, Yerehalli, S.G. Koppalu, Jiganehalli, Chikkabannuru, Nanjehalli, Sanuru, Nagenahalli. |
| 4 | Approximate Cost | 175 Lakhs |

The Corporation shall have and shall exercise all power which the telegraphs Authorities possess under Part IIII of the Indian Telegraph Act 1985 (18 of 1985) for carrying out the above Scheme. Objections to the above scheme if any, should be sent to the Superintending Engineer Ele, Transmission (W&M) Circle, KPTCL, Shimoga within two months from the date of publication of the Notification for consideration of the Corporation.

Superintending Engineer Ele
Transmission (W&M) Circle, KPTCL, Shimoga.

**KARNATAKA POWER TRANSMISSION CORPORATION LIMITED**

**No. SEE/Tr(W&M)/EE(O)/AEE/SSD/1315 Dated 22nd June 2004**

The Karnataka Power Transmission Corporation have formulated a Scheme under 28(A) of the Electricity Supply Act 1948 and the same is herewith published in pursuance of Section 29(ii) of the said Act for information of the License and any other person interested.

**Particulars of the scheme are as follows:**

| | | |
|---|---|---|
| 1 | Name of the Scheme | Construction of 110 KV Tap line to the proposed 110/11 KV sub-station at Nelekere (Santhedibba) - limits in Tarikere Tq. Tapping from 110 KV SBT Line (Length 2.627 Kms) |
| 2 | Salient features | To improve voltage and Power conditions in and around Nerelekere Limits Tarikere Tq. |
| 3 | Areas passing through | Santhedibba, K. Hosur |
| 4 | Approximate Cost | 25 Lakhs |

The Corporation shall have and shall exercise all power which the telegraphs Authorities possess under Part IIII of the Indian Telegraph Act 1985 (18 of 1985) for carrying out the above Scheme. Objections to the above scheme if any, should be sent to the Superintending Engineer Ele, Transmission (W&M) Circle, KPTCL, Shimoga within two months from the date of publication of the Notification for consideration of the Corporation.

PD-55

Superintending Engineer Ele
Transmission (W&M) Circle, KPTCL, Shimoga.

**ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ**

**ಪ್ರಕಟಣೆ**

**ಸಂಖ್ಯೆ: ಎಇಇ(ಒ)/ಟಿ-135/1262-63, ದಿನಾಂಕ: 1ನೇ ಜುಲೈ 2004**

ವಿದ್ಯುತ್ ಪೂರೈಕೆ ಅಧಿನಿಯಮ 1948, ಸೆಕ್ಷನ್ 28 ಮತ್ತು 18 (ಇ) ಅನುಸಾರವಾಗಿ ಕರ್ನಾಟಕ ವಿದ್ಯುತ್ ಪ್ರಸರಣಾ ನಿಗಮ ನಿಯಮಿತವು ಒಂದು ಯೋಜನೆಯನ್ನು ರೂಪಿಸಿದೆ. ಈ ಯೋಜನೆಯನ್ನು ಅದೇ ಅಧಿನಿಯಮದ ಸೆಕ್ಷನ್ 29(2) ಕ್ಕೆ ಅನುಸಾರವಾಗಿ ಇಲ್ಲಿ ಪ್ರಕಟಿಸಲಾಗಿದೆ. ಈ ಪ್ರಕಟಣೆಯನ್ನು ಲೈಸೆನ್ಸ್ ಹೊಂದಿರುವವರು ಮತ್ತು ಇನ್ನಿತರ ಯಾವುದೇ ಸಂಬಂಧಿಸಿದ ವ್ಯಕ್ತಿಗಳ ಮಾಹಿತಿಗಾಗಿ ನೀಡಲಾಗಿದೆ. ಯೋಜನೆಯ ವಿವರಗಳು ಕೆಳಗಿನಂತಿವೆ.

**ಕೆಲಸದ ಹೆಸರು:** 66 ಕೆ.ವಿ. ಜೋಡು ಪ್ರಸರಣಾ ಮಾರ್ಗ ನಿರ್ಮಾಣ

(1) ಹಾಲಿ ಇರುವ 110 ಕೆ.ವಿ. ಎಸ್.ಎಮ್.ಟಿ. ಮಾರ್ಗದ ಕಾರಿಡಾರಿನಲ್ಲಿ ಹಾಸನ ಕೈಗಾರಿಕಾ ಅಭಿವೃದ್ಧಿ ಕೇಂದ್ರದಿಂದ ಹೊಳೆನರಸೀಪುರ ವಿದ್ಯುತ್ ವಿತರಣಾ ಕೇಂದ್ರದವರೆಗೆ

(2) ಹಾಲಿ ಇರುವ 66 ಕೆ.ವಿ. ಎಮ್.ಬಿ.ಟಿ. ಮಾರ್ಗದ ಕಾರಿಡಾರಿನಲ್ಲಿ ಹೊಳೆನರಸೀಪುರ ವಿದ್ಯುತ್ ವಿತರಣಾ ಕೇಂದ್ರದಿಂದ ಹೂಟಗಳ್ಳಿ (ಮೈಸೂರು) ವಿದ್ಯುತ್ ಸ್ವೀಕರಣಾ ಕೇಂದ್ರದವರೆಗೆ

**ಉದ್ದೇಶ:** ಹೊಳೆನರಸೀಪುರ ಹಾಗೂ ಸುತ್ತಮುತ್ತಲ ಪ್ರದೇಶದಲ್ಲಿ ವೋಲ್ಟೇಜ್ ಸ್ಥಿತಿ ಉತ್ತಮಪಡಿಸಲು ಹಾಗೂ ಸ್ಥಿರವಾದ ವಿದ್ಯುತ್ ಪೂರೈಸುವ ಸಲುವಾಗಿ

**ಹಾದುಹೋಗುವ ಪ್ರದೇಶಗಳು:**

I. ನಾಗಟಹಳ್ಳಿ, ಕೊಪ್ಪಲು, ಕಂಚೀನಹಳ್ಳಿ, ಕಳ್ಳಿಕೊಪ್ಪಲು, ಬಸ್ತಿಹಳ್ಳಿ, ಮೊಸಳೆಹೊಸಹಳ್ಳಿ, ಚಿನ್ನನಟ್ಟೇನಹಳ್ಳಿ, ಯಾಮನಹಳ್ಳಿ, ಹಂಗಲರಹಳ್ಳಿ, ಮಾವಿನಕೆರೆ, ಕಾಮಸಮುದ್ರ, ವಡ್ಡರಪಾಳ್ಯ, ಕಟ್ಟೇಬೆಲಗುಲಿ, ಹಿರೇಬೆಳಗುಲಿ, ನಾಗಲಾಪುರ, ಹೊಳೆನರಸೀಪುರ.

II. ಹೊಳೆನರಸೀಪುರ ಹುಚ್ಚೇಕೊಪ್ಪಲು, ಅಂಕನಹಳ್ಳಿ, ಹಲಗೊಂಡನಹಳ್ಳಿ, ಚಿಕ್ಕಕಡಲೂರು, ದೊಡ್ಡಕಡಲೂರು, ಬಾಚನಹಳ್ಳಿ, ಕಬ್ಬೂರು, ಯಾಡೇಗೊಂಡಸಳ್ಳಿ, ದೊಡ್ಡಹಳ್ಳಿ, ಮಂಜನಹಳ್ಳಿ, ಬೇರ್ಯ, ಸುಗ್ಗನಹಳ್ಳಿ, ಹೊಸಅಗ್ರಹಾರ, ಅಗ್ರಹಾರ, ಬೊಮ್ಮನಹಳ್ಳಿ, ಗಂಗನಹಳ್ಳಿ, ಕಲ್ಯಾಣಪುರ, ಬಡಕಲಕೊಪ್ಪಲು, ಮಂಚೀನಹಳ್ಳಿ, ಹಂಪಾಪುರ, ಚಂದಗಾಲು, ಗಾಟನಹಳ್ಳಿ, ಕೆ.ಆರ್. ನಗರ, ಚೌಕಳ್ಳಿ, ಅರಕೆರೆ, ಸಿಂಗನಹಳ್ಳಿ, ಹೊಸರಾಮನಹಳ್ಳಿ, ಬಾಲನಹಳ್ಳಿ, ಮಲ್ಲಾಪುರ, ಬಿಳಿಕೆರೆ, ಜಾವರಹಳ್ಳಿ, ಮನುಗನಹಳ್ಳಿ, ಮಾಲೇನಹಳ್ಳಿ, ಅಂಕನಹಳ್ಳಿ, ಸೀಗೆಹಳ್ಳಿ, ನಾಗಾವಾಲ, ಲಿಂಗದೇವರಕೊಪ್ಪಲು, ಬೆಳವಾಡಿ, ಹೂಟಗಳ್ಳಿ.

**ಅಂದಾಜು ವೆಚ್ಚ:** ರೂ. 1222.89 ಲಕ್ಷಗಳು

ಮೇಲಿನ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಭಾರತೀಯ ಟೆಲಿಗ್ರಾಫ್ ಅಧಿನಿಯಮ 1985 (13) ರಲ್ಲಿ ಉಪಲಭ್ಯವಾಗಿರುವ ಎಲ್ಲಾ ಅಧಿಕಾರವನ್ನು ಕವಿಪ್ರನಿನಿ ಹೊಂದಿರುವುದು. ಮತ್ತು ಅಧಿಕಾರವನ್ನು ಕವಿಪ್ರನಿನಿ ಚಲಾಯಿಸುವುದು. ಈ ಯೋಜನೆಯ ಬಗೆಗೆ ಏನಾದರೂ ಆಕ್ಷೇಪಣೆಗಳು ಇದ್ದಲ್ಲಿ ಅದನ್ನು ಈ ಪ್ರಕಟಣೆಯ ದಿನಾಂಕದಿಂದ ಎರಡು ತಿಂಗಳೊಳಗಾಗಿ ಕಾರ್ಯಪಾಲಕ ಇಂಜಿನಿಯರ್ (ವಿ), ಬೃಹತ್‌ಕಾಮಗಾರಿ ವಿಭಾಗ, ಕವಿಪ್ರನಿನಿ, ಹಾಸನ ಇವರಿಗೆ ಸಲ್ಲಿಸಬೇಕಾಗಿ ವಿನಂತಿ.

ಕಾರ್ಯನಿರ್ವಾಹಕ ಇಂಜಿನಿಯರ್ (ವಿ)

ಪಿ.ಡಿ. 56

ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ/ಹಾಸನ.

**BANGALORE DEVELOPMENT AUTHORITY**
**Kumara Park West, T. Chowdaiah Road, Bangalore-560 020**
**No. BDA/Commr/ALAO/L.A.9/104/2003-04, Date: August, 2004**
**ERRATUM**

Preliminary Notification was issued for formation of "Arkavathi Layout" vide Notification No. BDA/Commr/ALAO/L.A.9/104/2002, dated 3.2.2003 which was published in the Karnataka Gazette on 3.2.2003 in part-III vide Page No. 1 to 179. In that Notification in page No. 179, the total extent notified was mentioned as 3339 Acres 12 Guntas due to arithematical error, Whereas the correct total extent is 3839 Acres 12 Guntas. Hence, the total extent 3339 Acres 12 Guntas in page No. 179 of the above said Preliminary Notification is to be read as 3839 Acres 12 Guntas.

Commissioner,
PD-58 Bangalore Development Authority, Bangalore.

**M/S. CAZENOVE INDIA (HOLDINGS) PRIVATE LIMITED**
**(Under Liquidation)**
**Regd. Office: No. 141, K, 1st Floor, 1st Main, 1st Block, Dr. Rajkumar Road, Rajajinagar, Bangalore-560 010**

NOTICE is hereby given in pursuance of Section 497 of the Companies Act, 1956 that a general meeting of the Members of the above named Company will be held at 11.00 A.M. on Monday the 18th October, 2004 at the registered office of the Company for the purpose of having an account laid before them showing the manner in which the winding up has been conducted and the property of the Company disposed of and of hearing of any explanation that may be given by the Liquidator and also of determining by a Special Resolution of the Company, the manner in which the books, account and documents of the Company and of the Liquidator shall be disposed of.

PD-59 **P. Sudarsanam,** Liquidator

**PROCEEDINGS OF THE REGISTERING AUTHORITY AND REGIONAL TRANSPORT OFFICER: INDIRANAGAR: BANGALORE (EAST): BANGALORE-38**

**Present :** Afzal Ahmed Khan, Regional Transport Officer & Registering Authority, Indiranagar, Bangalore (East).
**Sub :** Cancellation of registration certificate in respect of KA-03-D-8000 HGV Vehicle-Reg.
**Ref :** Form No. 30, dated: 19.05.2004 application for surrender, 2) Application dated: 27.05.2004

**Preamble:**

The registered owner of the HGV No. KA-03-D-8000 Sri Manohar S/o Sri D. Rajabahadur M/S Karnataka enterprises No. 150/E 4th Main New Thippasandra Bangalore on 19.05.2004 has surrendered the vehicle documents & the surrender has been provisionally accepted w.e.f., 19-05-2004 further the R/o in his letter dated 27.05.2004 requested to cancel the registration & registration certificate. As the M.V. is not in road worthy condition since it was burnt completely and the same is irrepairable.

In view of the above facts I pass the following.

**ORDER**
**No. RTO:BNG:E:RGN:TR.PR. KA-03-D-8000/04-05. Dated: 10th August, 2004**

In exercise of the powers vested under Sec. 55(1) of the Motor Vehicle Act, 1988, I Afzal Ahmed Khan, Registering Authority & Regional Transport Officer, Bangalore(East) do hereby cancel the registration & Registration Certificate of KA-03-D-8000 ARTICULATED HGV w.e.f. 19-07-2004 as desired by the R/o under non-use condition without prejudice and subject to recover the arrears of tax or penalty due if any found later on.

The brief description of the M. V. is as follows:

| | | |
|---|---|---|
| 1 | M.V.NO. | KA-03-D-8000 |
| 2 | Class of Vehicle | HGV |
| 3 | Type of Body | OPEN |
| 4 | Chassis No. | 388046 MXZ 124890 |
| 5 | Engine No. | 20L62246559 |
| 6 | Year of Manufacture | 2003 |

**AFZAL AHMED KHAN**
PR-1216 Regional Transport Officer & Registering Authority, Indiranagar, Bangalore (East).

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ**

**ಪ್ರ.ಸಂ.ಕಾಅದಾ:ಕಾನಪ:ಸಿಆರ್-193/04 ದಿನಾಂಕ: 19ನೇ ಆಗಸ್ಟ್ 2004**

**ಅರ್ಜಿದಾರರು :**

1. ಶ್ರೀಮತಿ ಶೇರುಬೀಯಾನ ಶೇರ್‌ಬಾನು ಕೋಂ. ಲೇಟ್ ಗುಲ್ಜಾರ್ ಅಲಿ
2. ಮೊಹಮದ್ ಖಮರ್ ರಾಜಾ ಬಿನ್ ಲೇಟ್ ಗುಲ್ಜಾರ್ ಅಲಿ
3. ಕುಮಾರಿ ರುಭೀನಬಾನು ಬಿನ್ ಲೇಟ್ ಗುಲ್ಜಾರ್ ಅಲಿ
4. ಕುಮಾರಿ ರುಹಿನಾಬಾನು ಬಿನ್ ಗುಲ್ಜಾರ್ ಅಲಿ
5. ಐರಣಿ ಅಬ್ದುಲ್ ರಹಿಂ ಸಾಬ್

**ವಿರುದ್ಧ**

**ಪ್ರತಿವಾದಿಗಳು :**

1. ಹಫಿಜುಲ್ಲಾ ಬಿನ್ ಲೇಟ್ ದಸ್ತಗಿರಿ ಸಾಬ್ ಇಮಾಂನಗರ ಶಹದಿಮಹಲ್ ರಸ್ತೆ ದಾವಣಗೆರೆ
2. ದಿ. ಮ್ಯಾನೇಜರ್ ಓರಿಯಂಟಲ್ ಇನ್ಸೂರೆನ್ಸ್ ಕಂ.ಲಿ., ದಾವಣಗೆರೆ

**ಪ್ರಕಟಣೆ**

ಶ್ರೀ:ಶ್ರೀಮತಿ ಶೇರುಭಿ, ಮೊಹಮದ್ ಖಮರ್ ರಾಜಾ, ರುಭೀನಭಾನು, ರಹೀನಭಾನು, ಐರಣಿ ಅಬ್ದುಲ್ ರಹೀಂಸಾಬ್ ಇವರುಗಳಾದ ತಾವು ಮೃತ ಗುಲ್ಜಾರ್ ಅಲಿ ಇವರ ಹೆಂಡತಿ ಮತ್ತು ಮಕ್ಕಳು ಹಾಗೂ ತಂದೆ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಗುಲ್ಜಾರ್ ಅಲಿ ರವರು ಒಂದನೇ ಪ್ರತಿವಾದಿಗಳಾದ ಹಫಿಜುಲ್ಲಾ ಬಿನ್ ಲೇಟ್ ದಸ್ತಗಿರಿ ಸಾಬ್ ಇವರ ಲಾರಿಯಲ್ಲಿ ಚಾಲಕ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ, ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು, ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

**ಸಿ. ಹೆಚ್. ಹಿರೇಗೌಡರ್**
ಕಾರ್ಮಿಕ ಅಧಿಕಾರಿ ಮತ್ತು ಆಯುಕ್ತರು ಕಾರ್ಮಿಕ ನಷ್ಟ ಪರಿಹಾರ,
ದಾವಣಗೆರೆ ಜಿಲ್ಲೆ. ದಾವಣಗೆರೆ.

ಪಿ.ಆರ್. 1217

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕರ ನಷ್ಟ ಪರಿಹಾರ ಆಯುಕ್ತರವರ ನ್ಯಾಯಾಲಯ, ದಾವಣಗೆರೆ ಜಿಲ್ಲೆ, ದಾವಣಗೆರೆ.**

**ಪ್ರ.ಸಂ ಕಾಅದಾ:ಕಾನಪ:ಸಿಆರ್-189/04 ದಿನಾಂಕ: 19ನೇ ಆಗಸ್ಟ್ 2004**

**ಅರ್ಜಿದಾರರು :**

1. ಶ್ರೀಮತಿ ಸಹೇನಾ ಬಾನು ಕೋಂ ಡಿಸೀಸ್ಡ್ ರಾಜಾಸಾಬ್ @ ರಾಜಾಬಕ್ಷಿ
2. ಮಹಮದ್ ಬಿನ್. ಡಿಸೀಸ್ಡ್ ರಾಜಾಸಾಬ್ @ ರಾಜಾಬಕ್ಷಿ
3. ಶೀಮಾಬಾನು ಬಿನ್ ಡಿಸೀಸ್ಡ್ ರಾಜಾಸಾಬ್ @ ರಾಜಾಬಕ್ಷಿ
4. ಸೈಯದ್ ಬಿನ್ ಡಿಸೀಸ್ಡ್ ರಾಜಾಸಾಬ್ @ ರಾಜಾಬಕ್ಷಿ
5. ಸಮೀರ್, ಬಿನ್ ಡಿಸೀಸ್ಡ್ ರಾಜಾಸಾಬ್ @ ರಾಜಾಬಕ್ಷಿ
6. ಸೈಫುಲ್ಲಾ
7. ರಮಿಜಾಬಿ ಕೋಂ ಸೈಫುಲ್ಲಾ, ದೇವರಹಟ್ಟಿ ಗ್ರಾಮ ಕಡ್ಲೆಬಾಳು (ಪೋಸ್ಟ್) ದಾವಣಗೆರೆ.

**ವಿರುದ್ಧ**

**ಪ್ರತಿವಾದಿಗಳು :**

1. ಈಶಪ್ಪ ವೈ. ಬಿನ್. ಭೀಮಪ್ಪ ಯರಗಲ್ ಟ್ರಾಕ್ಟರ್, ಮಾಲೀಕರು ನಂ. ಕೆಎ.17-7778 ದೇವರಾಜ್ ಅರಸ್ ಲೇಔಟ್ ಬಿ. ಬ್ಲಾಕ್ ದಾವಣಗೆರೆ.
2. ಡಿವಿಜನಲ್ ಮ್ಯಾನೇಜರ್ ನ್ಯಾಷನಲ್ ಇನ್ಸೂರೆನ್ಸ್ ಕಂ.ಲಿ., ದಾವಣಗೆರೆ.

**ಪ್ರಕಟಣೆ**

ಶ್ರೀ: ಶ್ರೀಮತಿ ಸಹೇನಾಬಾನು, ಮಹಮದ್, ಶೀಮಾಬಾನು, ಸೈಯದ್, ಸಮೀರ್, ಸೈಫುಲ್ಲಾ, ರಮಿಜಾಬಿ ಇವರುಗಳಾದ ತಾವು ಮೃತ ಡಿಸೀಸ್ಡ್ ರಾಜಾಸಾಬ್ @ ರಾಜಾಬಕ್ಷಿ ಇವರ ಹೆಂಡತಿ ಮತ್ತು ಮಕ್ಕಳು ಹಾಗೂ ತಾಯಿ ತಂದೆ ಎಂದೂ, ಅವರ ಸಾವಿಗಾಗಿ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿಸಲ್ಲಿಸಿರುತ್ತಾರೆ. ಮೃತ ಡಿಸೀಸ್ಡ್ ರಾಜಾಸಾಬ್ @ ರಾಜಾಬಕ್ಷಿ ರವರು ಒಂದನೇ ಪ್ರತಿವಾದಿಗಳಾದ ಈಶಪ್ಪ ವೈ. ಭೀಮಪ್ಪ ಯರಗಲ್ ಇವರ ಟ್ರಾಕ್ಟರ್ ನಲ್ಲಿ ಡ್ರೈವರ್ ಆಗಿ ಕೆಲಸ, ನಿರ್ವಹಿಸುತ್ತಿದ್ದಾಗ ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದೂ, ಸದರಿ ಅರ್ಜಿದಾರರು ತಿಳಿಸಿರುತ್ತಾರೆ, ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲೀ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೇ, ಅಂತಹವರು ಪ್ರಕಟಣೆಯು ಈ

